# ಕರ್ನಾಟಕ ವಿಧಾನ ಪರಿಷತ್ತು

ಮಾನ್ಯ ವಿಧಾನ ಪರಿಷತ್ತಿನ ಸದಸ್ಯರ ಹೆಸರು : ಶ್ರೀ ಯು.ಬಿ. ವೆಂಕಟೇಶ್ (ನಾಮನಿರ್ದೇಶನ ಹೊಂದಿದವರು)

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 04

ಉತ್ತರಿಸಬೇಕಾದ ದಿನಾಂಕ : 15.02.2022

ಉತ್ತರಿಸಬೇಕಾದ ಸಚಿವರು : ಸಹಕಾರ ಸಚಿವರು

| ಕ್ರ. ಸಂ. | ಪ್ರಶ್ನೆ | ಉತ್ತರ |
|---|---|---|
| ಅ) | ಸಹಕಾರ ಚುನಾವಣಾ ಪ್ರಾಧಿಕಾರವನ್ನು ರದ್ದುಗೊಳಿಸುವ ಪ್ರಸ್ತಾಪ ಸರ್ಕಾರದ ಮುಂದಿದೆಯೇ; ಹಾಗಿದ್ದಲ್ಲಿ, ಈ ಬಗ್ಗೆ ಸರ್ಕಾರ ತೆಗೆದುಕೊಂಡಿರುವ ಕ್ರಮಗಳೇನು; | ಇಂತಹ ಪ್ರಸ್ತಾವನೆ ಸರ್ಕಾರದ ಮುಂದೆ ಇರುವುದಿಲ್ಲ. |
| ಆ) | ಸಹಕಾರ ಸಂಘಗಳಲ್ಲಿ ನಡೆಯುವ ಹಣ ದುರುಪಯೋಗ, ಅವ್ಯವಹಾರಗಳನ್ನು ತಡೆಯಲು ಸರ್ಕಾರ ತೆಗೆದುಕೊಂಡ ಕ್ರಮಗಳೇನು; | ಸಹಕಾರ ಸಂಘಗಳಲ್ಲಿ ಪ್ರತಿ ಏಪ್ರಿಲ್‌ನಿಂದ ಮಾರ್ಚ್ ವರ್ಷದ ಅಂತ್ಯಕ್ಕೆ ಕರ್ನಾಟಕ ಸಹಕಾರ ಸಂಘಗಳ ಅಧಿನಿಯಮ-1959 ನಿಯಮಗಳು 1960 ಪ್ರಕರಣ 63ರಡಿ ಶಾಸನಬದ್ಧ ಲೆಕ್ಕಪರಿಶೋಧನೆ ಕಡ್ಡಾಯವಾಗಿ ನಡೆಸಲಾಗುತ್ತದೆ. ಲೆಕ್ಕಪರಿಶೋದನೆಯಲ್ಲಿ ಹಣದುರುಪಯೋಗ ಕಂಡುಬಂದಲ್ಲಿ ಸಕ್ಷಮ ಪ್ರಾಧಿಕಾರ ಲೆಕ್ಕಪರಿಶೋಧನಾ ವರದಿಯನ್ನು ಆಧರಿಸಿ ಸಿವಿಲ್ ಮತ್ತು ಕ್ರಿಮಿನಲ್ ಮೊಕದ್ದಮೆ ದಾಖಲಿಸಲು ಕ್ರಮವಿಡಲಾಗುತ್ತದೆ. ಕೆಲವೊಮ್ಮೆ ಸಹಕಾರ ಸಂಘಗಳಲ್ಲಿ ಗುರುತರ ಅಕ್ರಮ ಹಣಕಾಸು, ಅವ್ಯವಹಾರಗಳು ಕಂಡುಬಂದ ಸಂದರ್ಭದಲ್ಲಿ ಕಲಂ 64ರ ಶಾಸನಬದ್ಧ ವಿಚಾರಣೆ ಮತ್ತು 65ರ ಪರಿವೀಕ್ಷಣೆ ನಡೆಸಲಾಗುತ್ತದೆ. ಈ ವರದಿಗಳನ್ನು ಆಧರಿಸಿ ಹಣದುರುಪಯೋಗಕ್ಕೆ ಕಾರಣರಾದ ಆಡಳಿತ ಮಂಡಳಿ ಮತ್ತು ಸಿಬ್ಬಂದಿಯವರ ವಿರುದ್ಧ ನಿಯಮಾನುಸಾರ ವಸೂಲಿಗೆ ಕ್ರಮವಿಡಲಾಗುವುದು. |
| ಇ) | ಇಲ್ಲದಿದ್ದಲ್ಲಿ, ಯಾವಾಗ ಕ್ರಮ ಕೈಗೊಳ್ಳಲಾಗುವುದು; ನಿವಾರಣಾತ್ಮಕ ಕ್ರಮಗಳ ಬಗ್ಗೆ ಸರ್ಕಾರದ ನಿಲುವೇನು; | ಕರ್ನಾಟಕ ಸಹಕಾರ ಸಂಘಗಳ ಅಧಿನಿಯಮ 1959 ನಿಯಮಗಳು 1960 ರಡಿಯಲ್ಲಿ ಇರುವ ಅವಕಾಶಗಳಂತೆ ನಿಯಮಾನುಸಾರ ವಸೂಲಿಗೆ ಕ್ರಮವಿಡಲಾಗುವುದು. |
| ಈ) | ಶೈಕ್ಷಣಿಕ ಕ್ಷೇತ್ರವನ್ನು ಸಹಕಾರಿ ರಂಗದೊಡನೆ ಮೇಳೈಸುವುದರಿಂದ ಆಗುವ ಪರಿಣಾಮಗಳೇನು; ಈ ಬಗ್ಗೆ ಸರ್ಕಾರವು ಯಾವ ಕ್ರಮ ಕೈಗೊಳ್ಳಲಿದೆ; | ಶೈಕ್ಷಣಿಕ ಕ್ಷೇತ್ರವನ್ನು ಸಹಕಾರಿ ರಂಗದೊಡನೆ ಮೇಳೈಸುವ ಪ್ರಸ್ತಾವ ಸಹಕಾರ ಇಲಾಖೆಯಲ್ಲಿರುವುದಿಲ್ಲ. |
| ಉ) | ಸಹಕಾರಿ ಕ್ಷೇತ್ರದಲ್ಲಿ ಸಹಕಾರ ಸಂಘಗಳ ಮೂಲಕ ಶಾಖೆಗಳನ್ನು ತೆರೆಯಲು ಸರ್ಕಾರ ಉದ್ದೇಶಿಸಿದೆಯೇ; ಹಾಗಿದ್ದಲ್ಲಿ ಯೋಜನೆಯು ಯಾವ ಹಂತದಲ್ಲಿದೆ? (ಸಂಪೂರ್ಣ ವಿವರವನ್ನು ಒದಗಿಸುವುದು) | ಸಹಕಾರಿ ಕ್ಷೇತ್ರದಲ್ಲಿ ವಿವಿಧ ವರ್ಗದ ಸಹಕಾರ ಸಂಘಗಳು ಕಾರ್ಯನಿರ್ವಹಿಸುತ್ತಿದ್ದು ಅಸ್ತಿತ್ವದಲ್ಲಿರುವ ಆಯಾಯ ವರ್ಗದ ಸಂಘಗಳ ಕಾರ್ಯಚಟುವಟಿಕೆಯ ಉದ್ದೇಶಗಳನ್ನು ಆಧರಿಸಿ ಶಾಖೆ ತೆರೆಯುವ ಅವಶ್ಯಕತೆ ಇದ್ದಲ್ಲಿ ತಮ್ಮ ಕಾರ್ಯವ್ಯಾಪ್ತಿಯಲ್ಲಿ ಸಕ್ಷಮ ಪ್ರಾಧಿಕಾರದಿಂದ ಅನುಮತಿ ಪಡೆದು ಶಾಖೆ ತೆರೆಯಲು ಅವಕಾಶವಿರುತ್ತದೆ. |

ಸಿಒ 15 ಸಿಎಲ್‌ಎಮ್ 2022 (ಇ)

(ಎಸ್. ಟಿ. ಸೋಮಶೇಖರ್)
ಸಹಕಾರ ಸಚಿವರು